ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 03 ನೇ ಮಾರ್ಚ್, 2020

ಕೊಳಗೇರಿ ಪ್ರದೇಶದಲ್ಲಿ ವಾಸಿಸುವ ಯುವಕ/ಯುವತಿಯರಿಗೆ ವಿಶೇಷ ತರಬೇತಿ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

155 (177) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕೊಳಗೇರಿ ಯುವಕರ ಜೀವನ ರೂಪಿಸುವ ನಿಟ್ಟಿನಲ್ಲಿ ಅಲ್ಲಿನ ಯುವಕ ಯುವತಿಯರಿಗೆ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಭಾಗವಹಿಸಲು ತರಬೇತಿ ಶಿಕ್ಷಣ ಕೊಡುವ ಬಗ್ಗೆ ಸರ್ಕಾರದ ನಿಲುವೇನು ;

(ಆ) ಕೊಳಗೇರಿ ಯುವಕ ಯುವತಿಯರಿಗೆ ಉನ್ನತ ವ್ಯಾಸಂಗ ಮಾಡಲು ವಿಶೇಷ ತರಬೇತಿಯನ್ನು ನೀಡುವ ಯಾವ ಯಾವ ಯೋಜನೆಗಳಿವೆ ; (ವಿವರ ಒದಗಿಸುವುದು)

(ಇ) ಕೊಳಗೇರಿ ಅಭಿವೃದ್ಧಿ ಸಂಸ್ಥೆಯ ಮುಖಾಂತರ ಯುವಕ ಯುವತಿಯರಿಗೆ ಕೆ.ಎ.ಎಸ್. ಮತ್ತು ಐ.ಎ.ಎಸ್. ಉದ್ಯೋಗ ಪಡೆಯುವ ನಿಟ್ಟಿನಲ್ಲಿ ತರಬೇತಿ ನೀಡಲಾಗುತ್ತಿದೆಯೇ ;

(ಈ) ನೀಡುತ್ತಿದ್ದಲ್ಲಿ, ತರಬೇತಿ ಆಯ್ಕೆಗೆ ಯಾವ ಮಾನದಂಡವನ್ನು ರೂಪಿಸಲಾಗಿದೆ ; ಹಾಗೂ ಯಾವ ಸಂಸ್ಥೆಗೆ ನೀಡಲಾಗಿದೆ ;

(ಉ) ತರಬೇತಿ ಪಡೆಯಲು ನಿಗದಿಪಡಿಸಿರುವ ಅನುದಾನವೆಷ್ಟು ; ಈವರೆಗೆ ತರಬೇತಿ ಪಡೆದ ಫಲಾನುಭವಿಗಳ ಸಂಪೂರ್ಣ ವಿವರ ನೀಡುವುದು ?